ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ: 14ನೇ ಡಿಸೆಂಬರ್, 2020

ರಾಜ್ಯದ ಸ್ನಾತಕೋತ್ತರ ಕಾಲೇಜುಗಳಲ್ಲಿನ ವ್ಯವಸ್ಥೆಯ ಕುರಿತು

ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) :-

581(745) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿರುವ ಸರ್ಕಾರಿ ಪದವಿ ವ್ಯಾಸಂಗದ ಕಾಲೇಜುಗಳ ಸಂಖ್ಯೆ ಎಷ್ಟು; (ವಿವರ ನೀಡುವುದು)

(ಆ) ರಾಜ್ಯದಲ್ಲಿರುವ ಸ್ನಾತಕೋತ್ತರ ಕಾಲೇಜುಗಳ (ವಿಶ್ವವಿದ್ಯಾಲಯ ಬಿಟ್ಟು) ಸಂಖ್ಯೆ ಎಷ್ಟು; (ವಿವರ ನೀಡುವುದು)

(ಇ) ರಾಜ್ಯದಲ್ಲಿರುವ ಸ್ನಾತಕೋತ್ತರ ಕಾಲೇಜುಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಇದೆಯೇ; (ವಿವರ ನೀಡುವುದು)

(ಈ) ಈ ವಿಭಾಗಗಳಲ್ಲಿ ಯು.ಜಿ.ಸಿ. ಹಾಗೂ ವಿಶ್ವವಿದ್ಯಾಲಯಗಳಲ್ಲಿ ಜಾರಿ ಇರುವ ನಿಯಮಗಳ ರೀತಿಯಲ್ಲಿ ಸರತಿ ಸಾಲಿನ ಅನ್ವಯ ಸಂಯೋಜಕರನ್ನು ನೇಮಕ ಮಾಡಿಕೊಳ್ಳುವ ವ್ಯವಸ್ಥೆ ಇದೆಯೇ; (ವಿವರ ನೀಡುವುದು)

(ಉ) ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಅಭ್ಯಾಸ ಮಾಡಲು ಮೂಲಭೂತ ಸೌಕರ್ಯ ಸಿಗುವ ರೀತಿಯಲ್ಲಿ ಸರ್ಕಾರಿ ಸ್ನಾತಕೋತ್ತರ ಕಾಲೇಜುಗಳಲ್ಲಿ ವ್ಯವಸ್ಥೆ ಕಲ್ಪಿಸಲಾಗಿದೆಯೇ; (ವಿವರ ನೀಡುವುದು)

(ಊ) ಸರ್ಕಾರದ ಸ್ನಾತಕೋತ್ತರ ಕಾಲೇಜುಗಳಲ್ಲಿ ಸಂಯೋಜಕರು ದೈನಂದಿನ ಕಾರ್ಯನಿರ್ವಹಿಸುವ ಚಟುವಟಿಕೆಗಳ ಕುರಿತು ಯಾವುದಾದರೂ ಸರ್ಕಾರಿ ಆದೇಶಗಳು ಅಥವಾ ಸುತ್ತೋಲೆಗಳು ಜಾರಿಯಲ್ಲಿವೆಯೇ; (ವಿವರ ನೀಡುವುದು) ಇದ್ದಲ್ಲಿ, ಈ ಆದೇಶಗಳಿಗೆ ಮತ್ತು ಸುತ್ತೋಲೆಗಳಿಗೆ ಶಾಸನಬದ್ಧವಾದ ಅಧಾರವಿದೆಯೇ? (ವಿವರ ನೀಡುವುದು)